# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1373
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 09.03.2022
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಮದ್ದೂರು ತಾಲ್ಲೂಕು ದುರುಗಲವಾಡಿ ಗ್ರಾಮದ ಸರ್ವೆ ನಂ.129 ರಿಂದ 8 ರವರೆಗೆ ಅಂದಾಜು 60 ಎಕರೆ ಬೇಸಾಯ ಜಮೀನಿಗೆ ರಸ್ತೆ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿದೆ.<br><br>ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಹುರುಗಲವಾಡಿ ಗ್ರಾಮದ ಸರ್ವೆ ನಂ.129 ಹಿಡುವಳಿ ಜಮೀನಾಗಿದ್ದು, ಗ್ರಾಮ ನಕಾಶೆಯಂತೆ ಅಧಿಕೃತ ರಸ್ತೆ ಇರುತ್ತದೆ ಹಾಗೂ ಸ.ನಂ. 8 ಹಿಡುವಳಿ ಜಮೀನಾಗಿದ್ದು, ಉತ್ತರದ ಭಾಗದಲ್ಲಿ ರಸ್ತೆ ಇರುತ್ತದೆ. ಸ.ನಂ. 125, 126, 67, 63, 64, 8, 59, 60, 62, 66 ಮತ್ತು 68ರ ಹಿಡುವಳಿ ಜಮೀನುಗಳ ನಡುವೆ ಗ್ರಾಮ ನಕಾಶೆಯಂತೆ ಯಾವುದೇ ಅಧಿಕೃತ ರಸ್ತೆ ಇರುವುದಿಲ್ಲ. ಆದರೆ, ಹದ್ದುಗಿಡದ ಹಳ್ಳ ಇದ್ದು, ದಿನಾಂಕ 22.02.2022 ರಂದು ಅಳತೆ ಮಾಡಲಾಗಿ, ಒತ್ತುವರಿಯಾಗಿರುವುದು ಕಂಡುಬಂದಿರುತ್ತದೆ. ಮೇಲ್ಕಂಡ ಜಮೀನುಗಳ ಬಾಜುವಿನಲ್ಲಿರುವ ಹದ್ದುಗಿಡದ ಹಳ್ಳದ ಒತ್ತುವರಿಯನ್ನು ತೆರವುಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ. |
| (ಆ) | ರಸ್ತೆ ಇಲ್ಲದೆ ದುರುಗಲವಾಡಿ, ಉಜ್ಜಿಚನ್ನನದೊಡ್ಡಿ ಹಾಗೂ ದೊಸದಳ್ಳಿ ಗ್ರಾಮದ ರೈತರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿದೆ. |
| (ಇ) | ಬಂದಿದ್ದಲ್ಲಿ, ಸರ್ವೆ ಮಾಡಿ 2 ಕಿ.ಮೀ. ದೂರದ ನಾಲಾ ರಸ್ತೆಯನ್ನು ನಿರ್ಮಾಣ ಮಾಡಿ ರೈತರಿಗೆ ಅನುಕೂಲ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಮದ್ದೂರು ತಾಲ್ಲೂಕು ವ್ಯಾಪ್ತಿಯಲ್ಲಿ ಒಟ್ಟು 163.61 ಕಿಲೋ ಮೀಟರ್ ಅಚ್ಚುಕಟ್ಟು ರಸ್ತೆಯಿದ್ದು, 2020-21ನೇ ಸಾಲಿನ ಅಂತ್ಯದವರೆಗೆ ಒಟ್ಟು 65.76 ಕಿಲೋ ಮೀಟರ್ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿರುತ್ತದೆ. ಉಳಿಕೆ 97.85 ಕಿಲೋ ಮೀಟರ್ ರಸ್ತೆಯನ್ನು ಲಭ್ಯವಿರುವ ಅನುದಾನಕ್ಕೆ ಅನುಗುಣವಾಗಿ ಅಭಿವೃದ್ಧಿಪಡಿಸಲಾಗುವುದು. |

(ಕಡತ ಸಂಖ್ಯೆ:ಕಂಇ 13 ಎಲ್‌ಜಿಮ್ಮೆ 2022)

(ಆರ್.ಅಶೋಕ)
ಕಂದಾಯ ಸಚಿವರು